# ಗೇರುಸೊಪ್ಪೆ-ಒಂದು ಅಧ್ಯಯನ

ಶ್ರೀ ಎಂ.ಎಸ್. ಹೆಗಡೆ ಕಣಿ

ಐತಿಹಾಸಿಕ ದೃಷ್ಟಿಯಿಂದ ಉತ್ತರ ಕನ್ನಡ ಜಿಲ್ಲೆಯ ಹೊನ್ನಾವರ ತಾಲೂಕಿನ 'ಗೇರುಸೊಪ್ಪೆ'ಯ ಕುರಿತು ಸಾಕಷ್ಟು ಅಧ್ಯಯನ ನಡೆದಿದ್ದರೂ ಕಲಾ–ವಾಸ್ತುಶಿಲ್ಪದ ದೃಷ್ಟಿಯಿಂದ ಇನ್ನೂ ಸಂಶೋಧನೆಗೆ ಯೋಗ್ಯವಾದ ಹಲವಾರು ವಿಷಯಗಳಿವೆ. ಗೇರುಸೊಪ್ಪೆಯನ್ನು ಶಾಸನಗಳಲ್ಲಿ ನಗಿರಾರಾಜ್ಯ, ನಗರಿರಾಜ್ಯ, ಕ್ಷೇಮಪುರ ಮತ್ತು ಭಲ್ಲಾತಕೀಪುರ ಎಂದೆಲ್ಲ ಹೆಸರಿಸಲಾಗಿದೆ.[1] ಹದಿನಾರನೇ ಶತಮಾನದಲ್ಲಿ ಈ ಪ್ರದೇಶಕ್ಕೆ ಬೆಟ್ಟಿಕೊಟ್ಟ ಇಟಲಿಯ ಪ್ರವಾಸಿ 'ಪಿಯತ್ರೊ ಡೆಲ್ಲಾ ವಲ್ಲೆ' ಎಂಬವನು ಗೇರುಸೊಪ್ಪೆಯನ್ನು 'ಗೆರ್ಸೊಪ್ಪ್' ಎಂದು ಕರೆದಿದ್ದಾನೆ.[2] ಈತನ ಬರಹದಿಂದ ನಮಗೆ ಈ ಪ್ರದೇಶದ 'ಕಲೆ-ವಾಸ್ತುಶಿಲ್ಪ'ದ ಬಗೆಗೂ ಅಲ್ಪಸ್ವಲ್ಪಗೆ ವಿಷಯಗಳು ಲಭ್ಯವಾಗುತ್ತವೆ. ದೇವಾಲಯಗಳನ್ನು ಕಲ್ಲು ಹಾಗೂ ಮಣ್ಣಿನಿಂದ ನಿರ್ಮಿಸುತ್ತಿದ್ದರೆಂದೂ ಮತ್ತು ಆಕಳ ಸಗಣಿಯಿಂದ ಅವುಗಳನ್ನು ಶುಭ್ರಗೊಳಿಸುತ್ತಿದ್ದರೆಂದೂ ತಿಳಿದುಬರುತ್ತದೆ. ಈತ ಗೇರುಸೊಪ್ಪೆಗೆ ಬೆಟ್ಟಿಕೊಟ್ಟ ವೇಳೆಗಾಗಲೇ ಗೇರುಸೊಪ್ಪೆಯ ಸೌಂದರ್ಯ ಕಾಡುಪಾಲಾಗಿತ್ತು.

**ಗೇರುಸೊಪ್ಪೆಯ ಗೋವರ್ಧನಗಿರಿ ಕೋಟೆ :** ಗೇರುಸೊಪ್ಪೆಯಲ್ಲಿನ ಉತ್ತರ ಪ್ರದೇಶದಲ್ಲಿರುವ ಕೋಟೆಯ ಬಗ್ಗೆ ಡೆಲ್ಲಾವಲ್ಲೆ ಬರೆದಿದ್ದಾನೆ. ಈ ವೇಳೆಗೆ ಈ ಕೋಟೆ ಕೆಳದಿಯ ವೆಂಕಟಪ್ಪನಾಯಕನ ಅಧೀನದಲ್ಲಿತ್ತೆಂದು ಆತನ ವಿವರಣೆಯಿಂದ ತಿಳಿದುಬರುತ್ತದೆ. 'ಗೋವರ್ಧನಗಿರಿ' ಎಂಬ ಪ್ರದೇಶವನ್ನು ಗೇರುಸೊಪ್ಪೆಯ ರಾಣಿ ಚೆನ್ನಭೈರಾದೇವಿಯಿಂದ ವೆಂಕಟಪ್ಪನಾಯಕನು ಕಸಿದುಕೊಂಡ ಬಗ್ಗೆ ಲಿಂಗಣ್ಣಕವಿ ಬರೆದ 'ಕೆಳದಿ ನೃಪ ವಿಜಯಂ' ಕೃತಿಯಲ್ಲಿ ಉಲ್ಲೇಖಿಸಲಾಗಿದೆ.[3] ಗೋವರ್ಧನ ಗಿರಿ ಪ್ರದೇಶದಲ್ಲಿ ಬರುವ ಈ ಕೋಟೆಯನ್ನು ವೆಂಕಟಪ್ಪ ನಾಯಕನು ಈ ಪ್ರದೇಶವನ್ನು ಕಸಿದುಕೊಳ್ಳುವದಕ್ಕಿಂತ ಮುಂಚೆಯೇ ನಿರ್ಮಿಸಲಾಗಿತ್ತೋ ಅಥವಾ ನಂತರದಲ್ಲಿ ನಿರ್ಮಿಸಲಾಯಿತೋ ಎನ್ನುವದನ್ನು ಸಂಶೋಧಿಸಬೇಕಾಗಿದೆ.

ಗೇರುಸೊಪ್ಪೆಯಲ್ಲಿ ಈ ಕೋಟೆಯಿರುವ ಪ್ರದೇಶವನ್ನು ಸುತ್ತಾಡಿದರೆ ಇದು ಸುಮಾರು ೩ ಕಿ.ಮೀಗಳಿಗಿಂತಲೂ ವಿಸ್ತಾರವಾಗಿಬಹುದೇನೊ ಎನಿಸುತ್ತದೆ. ಸುಭದ್ರವಾಗಿ ಬಿಳಿಪು ಮಿಶ್ರಿತ ಕಪ್ಪು ಶಿಲೆಯಿಂದ ಹೊರ ಆರವಣವನ್ನು ಕಟ್ಟಲಾಗಿದೆ. ಹಲವಾರು ಸುತ್ತುಗಳಿಂದ ಕೂಡಿದ ಈ ಕೋಟೆಯಲ್ಲಿ ಸಣ್ಣ ಸಣ್ಣ ಶಿಲಾಚಪ್ಪಡಿಗಳನ್ನು ಮಾತ್ರವಲ್ಲದೇ ಮಣ್ಣನ್ನು ಕೂಡ ಬಳಸಲಾಗಿದೆ. ಪ್ರವೇಶದ್ವಾರದ ಲಲಾಟಬಿಂಬದಲ್ಲಿ ಸುಖ್ಯಲಲಿತಾಸನದಲ್ಲಿರುವ ಚತುರ್ಭುಜ ಗಣೇಶನನ್ನು ಕೆತ್ತಲಾಗಿದೆ.

**ಕೋಟೆಗಿಂತ ತಗ್ಗುಪ್ರದೇಶದಲ್ಲಿರುವ ಕೆರೆ :** ಕೋಟೆಯ ಸ್ವಲ್ಪ ಕೆಳಗೆ ತಗ್ಗಾದ ಪ್ರದೇಶದಲ್ಲಿ ವಿಸ್ತಾರ

1 ಸೌ.ಇಂ.ಇನ್ಸ್. ಸಂ. VII ೨೦೩, ೨೦೭

2 ದಿ ಟ್ರೆವಲ್ಸ್ ಆಫ್ ಪಿಯತ್ರೋಡೆಲ್ಲಾವಲ್ಲೆ ಇನ್ ಇಂಡಿಯಾ (ಲಂಡನ್) ೧೮೯೩

3 'ಕೆಳದಿ ನೃಪ ವಿಜಯಂ' : ಲಿಂಗಣ್ಣಕವಿ

ವಾದ ಕೆರೆಯೊಂದಿದೆ. ಇದರ ಮೂಲಸ್ವರೂಪ ನಿರ್ದಿಷ್ಟ ವಾಗಿ ಗಮನಕ್ಕೆ ಬರದಿದ್ದರೂ ನೀರಿನ ದೃಷ್ಟಿಯಿಂದ ಇದು ಆಗ ಪ್ರಮುಖ ಪಾತ್ರ ವಹಿಸಿರಬೇಕು. ಕೋಟೆಗೆ ಸಮೀಪಿಸಿಯೇ ಈ ಕೆರೆ ಇರುವದರಿಂದ ಇದು ಅತ್ಯಂತ ಪ್ರಸಿದ್ಧಿ ಪಡೆದ ಕೆರೆಯಾಗಿದ್ದಿರಬಹುದು.

**ಹನುಮಂತನ ಗುಡಿಯ ಕುರುಹು :** ಕೆರೆಯ ಮೇಲ್ಗಡೆ ಕೋಟೆಗೆ ಹೋಗುವ ಮಾರ್ಗದಲ್ಲಿಯೇ ಹುಗಿದುಹೋದ ಹನುಮಂತನ ಗುಡಿಯೊಂದಿದೆ. ಹನುಮಂತನ ವಿಗ್ರಹ ಮೇಲ್ಗಡೆಯೇ ಪ್ರತ್ಯೇಕವಾಗಿದೆ. ಈಗ ಅಲ್ಲಿ ವಾಸಿಸುವ ಜನ ವಿಗ್ರಹವನ್ನು ಮೇಲ್ಗಡೆ ತೆಗೆದಿರಿಸಿದ್ದಾರೆ. ವಿಗ್ರಹ ಚೆನ್ನಾಗಿದ್ದು ವಿಜಯನಗರ ಶೈಲಿಯಲ್ಲಿದೆ. ದೇವಸ್ಥಾನಕ್ಕೆ ಬಳಸಿದ ದ್ವಾರಬಂಧ ಗಳೆರಡು ಮುಕ್ಕಾಲು ಪಾಲು ಕುಸಿದಿದೆ. ಇದೇ ದೇವ ಸ್ಥಾನಕ್ಕೆ ಸಂಬಂಧಿಸಿದ ಶಿಲಾಶಾಸನವೊಂದು ಮುಕ್ಕಾಲು ಪಾಲು ಹುಗಿದಿದೆ. ಈ ಶಾಸನದ ತಲೆಯಲ್ಲಿ ಹನುಮಂತನ ಕೆತ್ತನೆಯಿದೆ. ಬಲ ಹಾಗೂ ಎಡಕ್ಕೆ ಚಕ್ರ-ಶಂಖದ ಕೆತ್ತನೆಯಿದೆ. ಶಾಸನದ ಎರಡು ಸಾಲುಗಳು ಮಾತ್ರ ಕಂಡುಬರುತ್ತವೆ. ಮಧ್ಯಯುಗೀನ ಹಳೆಗನ್ನಡ ಲಿಪಿ ಯಲ್ಲಿರುವ ಈ ಶಾಸನ ಮಹತ್ವದ್ದಾಗಿರಬೇಕು. ಕಾರಣ ಶಾಸನವನ್ನೊಳಗೊಂಡ ದೇವಸ್ಥಾನಗಳು ಐತಿಹಾಸಿಕ ವಾಗಿ ಪ್ರಮುಖ ಪಾತ್ರವಹಿಸುವ ಸಂಗತಿ ಸಂಶೋಧನೆ ಗಳಿಂದ ತಿಳಿದುಬರುವ ವಿಚಾರ. ಈ ಪ್ರದೇಶದಲ್ಲಿ ಭೂ-ಉತ್ಖನನ ನಡೆದರೆ ಹುಗಿದ ಈ ದೇವಸ್ಥಾನದ ವಾಸ್ತು ಶೈಲಿಯ ಚಿತ್ರ ದೊರೆಯಬಹುದು.

ಈ ಮೇಲಿನ ಹನುಮಂತನ ವಿಗ್ರಹದ ಲಕ್ಷಣ ಗಳನ್ನೇ ಒಳಗೊಂಡ ಇನ್ನೊಂದು ವಿಗ್ರಹ ಗೇರಸೊಪ್ಪೆಯ ಕೆಳಪ್ರದೇಶದಲ್ಲಿ ಈಗ ಆಧುನಿಕ ಕಟ್ಟಡವೊಂದರಲ್ಲಿ ಪೂಜೆಗೊಳ್ಳುತ್ತಿದೆ[4] ಈ ದೃಷ್ಟಿಯಿಂದ ಐತಿಹಾಸಿಕ ಗೇರುಸೊಪ್ಪೆ ಹನುಮಂತನ ಆರಾಧನೆಯಲ್ಲಿ ಪ್ರಮುಖ ಪಾತ್ರ ಪಡೆದಿತ್ತೆನ್ನಬಹುದು. ಪ್ರವಾಸಿ ಪಿಯತ್ರೋ ಡೆಲ್ಲಾವಲ್ಲೆ ಕೂಡ ಆತ ಈ ಪ್ರದೇಶಗಳಿಗೆ ಬೇಟಿ ಕೊಟ್ಟ ವೇಳೆಯಲ್ಲಿ ಹನುಮಪ್ಪನ ಆರಾಧನೆಯನ್ನು ಕಣ್ಣಾರೆ ಕಂಡದನ್ನು ಬರೆದಿದ್ದಾನೆ. ಆದ್ದರಿಂದ ಆತ ಬರೆದ ವಿಷಯ ಕೋಟೆಯ ಸಮೀಪದ ಹನುಮಪ್ಪನ ಕುರಿತೇ ಆಗಿರಬೇಕು. ಇಲ್ಲಿಯ ಶಾಸನದ ಪಡಿಯಚ್ಚು ತೆಗೆದು, ಕೋಟೆಯ ಬಗೆಗೆ ವಿಷಯವೇನಾದರೂ ದೊರೆಯುವದೋ ಎಂಬುದನ್ನು ಪರಿಶೀಲಿಸಬೇಕಾಗಿದೆ.

**ಕಾಳಿಗುಡಿ :** ಈ ಮೇಲೆ ವಿವರಿಸಿದ ಹನು ಮಂತನ ಗುಡಿಗೆ ಸಮೀಪಿಸಿಯೇ ಸಣ್ಣ ಸಣ್ಣ ಶಿಲಾ ಚಪ್ಪಡಿಗಳಿಂದ ನಿರ್ಮಿಸಿದ ಕಾಳಿಗುಡಿಯಿದೆ. ಈ ಗುಡಿ ಯಲ್ಲಿ ಕಾಳಿಯ ತಲೆಯ ಭಾಗವೊಂದನ್ನು ಕೆತ್ತಿ ಇರಿಸಿ ದ್ದಾರೆ. ಇದೇ ರೀತಿಯ ಇನ್ನೆರಡು ರುಂಡಗಳು ಗೇರು ಸೊಪ್ಪೆಯ ಕೆಳಪ್ರದೇಶದಲ್ಲಿವೆ. ಈ ಪ್ರದೇಶವನ್ನು 'ಮಾರಿ ಗುಡಿ' ಎಂದೇ ಕರೆಯಲಾಗಿದೆ. ಈ ಸ್ಥಳದಲ್ಲಿ ಕೂಡ ಹನುಮಂತನ ಗುಡಿಯಿತ್ತೆಂದೂ, ಇಲ್ಲಿಯ ವಿಗ್ರಹವನ್ನೇ ಆಧುನಿಕ ಕಟ್ಟಡದಲ್ಲಿ ಇರಿಸಲಾಗಿದೆಯೆಂದೂ ಜನ ಹೇಳುತ್ತಾರೆ. ಆದ್ದರಿಂದ ಕಾಳಿ ಆರಾಧನೆ ಹಾಗೂ ಹನುಮಂತನ ಆರಾಧನೆ ಸಮೀಪದಲ್ಲಿಯೇ ನಡೆಯು ತ್ತಿದ್ದವೆಂಬುದಕ್ಕೆ ಎರಡು ಸಾಕ್ಷ್ಯಗಳು ದೊರೆತಂತಾ ಯಿತು.

**ನಗರ ಬಸ್ತಿಕೇರಿ :** ಗೇರುಸೊಪ್ಪೆಯಲ್ಲಿ 'ನಗರ ಬಸ್ತಿಕೇರಿ' ಎಂಬ ವಿಸ್ತಾರವಾದ ಪ್ರದೇಶದಲ್ಲಿ ಜೈನ ವಾಸ್ತುಶಿಲ್ಪಗಳ ಸಂಖ್ಯೆಯೇ ಅಧಿಕವಾಗಿತ್ತೆಂದು ತಿಳಿದು ಬರುತ್ತದೆ. ಶಾಸನಗಳಲ್ಲಿ ಕೂಡ 'ನಗರ ಬಸದಿ ಕೇರಿ' ಎಂದೇ ಈ ಪ್ರದೇಶವನ್ನು ಕರೆಯಲಾಗಿದೆ.[5] ಬಸದಿಗಳೇ ಅಧಿಕವಾಗಿರುವದರಿಂದ ಈ ಹೆಸರು ರೂಢಿಯಾಗಿರ ಬಹುದು. ಸುಮಾರು ೫ ಕಿ.ಮೀ. ವಿಸ್ತೀರ್ಣವುಳ್ಳ ಈ ಪ್ರದೇಶದಲ್ಲಿ ಎಲ್ಲಿ ನೋಡಿದರೂ ಪಾಳುಬಿದ್ದ ಬಸದಿಗಳು, ಶಿಲಾ ಭಾವಣಿಗಳು, ಸ್ತಂಭಗಳು, ಚಿತ್ರಗಳುಳ್ಳ ಪಟ್ಟಿಕೆ ಗಳು ಮತ್ತು ದ್ವಾರಬಂಧಗಳು ಮತ್ತು ಬಸದಿ ಗಳ ಅಧಿಷ್ಠಾನದ ಭಾಗಗಳು ಕಂಡುಬರುತ್ತವೆ. ಬಹುತೇಕ ಬಸದಿಗಳು ಕಡಗಲ್ಲು (ಲ್ಯಾಟರೈಟ್)ಗಳಿಂದಲೇ ನಿರ್ಮಿಸಿದವುಗಳಾಗಿವೆ.[6] ಜನ ವಾಸ್ತವ್ಯದ ನೆಲೆಗಳು ನೀರಿಗಾಗಿ ಉಪಯೋಗಿಸಿದ ನೂರಾರು

4 ಉತ್ತರ ಕನ್ನಡ ಗೆಜೆಟೀರ್ ಸಂ. ಕಾಮತ್ ಸೂರ್ಯನಾಥ್

5 ಎಮ್.ಎ.ಆರ್. ೧೯೨೮

6 ಚಾಲುಕ್ಯನ್ ಆರ್ಕಿಟೆಕ್ಚರ್ :ಕಝಿನ್ಸ್ ಹೆನ್ರಿ

ಕೆರೆ-ಬಾವಿಗಳು ಈ ಪ್ರದೇಶದಲ್ಲಿ ಕಂಡುಬರುತ್ತವೆ. ಬಾವಿಗಳ ರಚನೆಯಲ್ಲಿ ಸಾಮ್ಯತೆಯಿದೆ. ನಗರಬಸ್ತಿಕೇರಿಯಲ್ಲಿ ಶೈವ-ವೈಷ್ಣವ ವಾಸ್ತುಶಿಲ್ಪ ಕುರುಹುಗಳೂ ಇಲ್ಲದಿಲ್ಲ. ಮೂರ್ತಿಶಿಲ್ಪಗಳೂ ಅಧಿಕ ಸಂಖ್ಯೆಯಲ್ಲಿ ಲಭ್ಯವಾಗುತ್ತವೆ.

**ಚತುರ್ಮುಖ ಬಸದಿ :** ಈಗಾಗಲೇ ಅಧ್ಯಯನಕ್ಕೆ ಒಳಗಾದ ಚತುರ್ಮುಖ ಬಸದಿಯಲ್ಲಿ ಅಧ್ಯಯನಕ್ಕೆ ಯೋಗ್ಯವಾದ ಹಲವಾರು ವಿಷಯಗಳಿವೆ. ಅಧ್ಯಯನದ ದೃಷ್ಟಿಯಿಂದ ಅಧಿಷ್ಠಾನದಲ್ಲಿನ ಚಿತ್ರಪಟ್ಟಿಕೆಗಳೂ, ಭಿತ್ತಿಭಾಗದಲ್ಲಿ ತುಂಬಿರತಕ್ಕ ವಿಭಿನ್ನ ಶೈಲಿಯ ದೇವಕೋಷ್ಟಗಳೂ, ನವರಂಗ ಹಾಗೂ ಗರ್ಭಗೃಹದಲ್ಲಿನ ಛತ್ತುಗಳೂ, ಸ್ತಂಭಗಳೂ ಮತ್ತು ಪ್ರವೇಶದ್ವಾರಗಳಲ್ಲಿ ಕೊರೆದ ದ್ವಿಭಂಗಿಯ ದ್ವಾರಪಾಲಕರ ಶಿಲ್ಪಗಳು ಪ್ರಾಮುಖ್ಯವೆನಿಸುತ್ತವೆ. ಮಾತ್ರವಲ್ಲ, ಬಸದಿಯ ಹೊರಗಡೆ ಮುಖ್ಯ ಅಧಿಷ್ಠಾನದ ಎಲ್ಲ ದಿಕ್ಕುಗಳ ಮೂಲೆಗಳಲ್ಲಿಯೂ ನಿಲ್ಲಿಸಿದ ಸರಳ ಅಲಂಕರಣೆಯ ಸ್ತಂಭಗಳೂ ಕೂಡ ಅಧ್ಯಯನದ ದೃಷ್ಟಿಯಿಂದ ಉಪಯುಕ್ತವಾದವುಗಳಾಗಿವೆ. ಈ ಸ್ತಂಭಗಳನ್ನು ಬಸದಿಯ ತಲೆಯ ಭಾಗದಿಂದ ಇಳಿಜಾರು ಛಾವಣಿಗಳನ್ನು ಜೋಡಿಸುವದಕ್ಕಾಗಿ ನಿಲ್ಲಿಸಿದ್ದರೆಂದು ತೋರುತ್ತದೆ. ಆದರೆ ಈ ಕೆಲಸವನ್ನು ಪೂರ್ತಿಗೊಳಿಸಿಲ್ಲ.

ಚತುರ್ಮುಖ ಬಸದಿಯನ್ನು ಮಾತ್ರ ಬಿಳಿಪುಮಿಶ್ರಿತ ಕಪ್ಪುಶಿಲೆಯಿಂದ ನಿರ್ಮಿಸಲಾಗಿದೆ. ಉಳಿದ ಬಸದಿಗಳೆಲ್ಲವೂ ಕೇವಲ ಮುಖ್ಯ ಭಾಗಗಳನ್ನಷ್ಟೇ ಶಿಲೆಯಿಂದ ಪಡೆದಿವೆ. ಕಡಗಲ್ಲಿನಿಂದ ನಿರ್ಮಿತವಾದ ಇಂತಹ ಬಸದಿಗಳು ಬಹುಬೇಗ ನಶಿಸಿದವು. ಗರ್ಭಗೃಹದ ಮೂಲವಿಗ್ರಹಗಳು ಮಾತ್ರ ಶಿಲೆಯಿಂದಾಗಿದ್ದು ಸೂಕ್ಷ್ಮಕೆತ್ತನೆಗೆ ಒಳಗಾಗಿವೆ. ಇವುಗಳ ದಿವ್ಯ ತೇಜಸ್ಸಿಗೆ ಸರಿಸಮಾನವಾದವುಗಳು ಹೊರ ಆವರಣದ ಕಡಗಲ್ಲಿನ ಕಟ್ಟಡಗಳು ; ಇದಕ್ಕೆ ಕಾರಣ ಈ ಪ್ರದೇಶದಲ್ಲಿ ವಿರಳವಾಗಿರುವ ಶಿಲೆಯುದ್ದೇ ಇರಬೇಕು. ಮಧ್ಯಯುಗೀನ ಕಾಲದಲ್ಲಿ ಜೈನರಲ್ಲಿ ಚತುರ್ಮುಖಬಸದಿ ಪ್ರಮುಖ ಪಾತ್ರವಹಿಸುತ್ತಿದ್ದರಿಂದ ಇದನ್ನು ಮಾತ್ರ ಪೂರ್ತಿಯಾಗಿ ಶಿಲೆಯಿಂದಲೇ ನಿರ್ಮಿಸಿರಬೇಕು.

ಒಟ್ಟಾರೆ ಗೇರುಸೊಪ್ಪೆಯಲ್ಲಿ ವಾಸ್ತುಶಿಲ್ಪ, ಮೂರ್ತಿಶಿಲ್ಪ, ಆರ್ಥಿಕ, ಸಾಮಾಜಿಕ, ಧಾರ್ಮಿಕ ಮತ್ತು ಶೈಕ್ಷಣಿಕ ದೃಷ್ಟಿಯಿಂದ ಇನ್ನೂ ಹೆಚ್ಚಿನ ವ್ಯಾಸಂಗವನ್ನು ಕೈಗೊಳ್ಳಬಹುದು. ಇದಕ್ಕೆ ಈಗಾಗಲೇ ಪ್ರಕಟವಾದ ಮತ್ತು ಸಂಶೋಧಿಸಬಹುದಾದ ಶಾಸನಗಳನ್ನು ಮೂಲಾಧಾರಗಳಾಗಿ ಪಡೆಯಬಹುದು. ○


## ಕೃತಜ್ಞತೆಗಳು

ಈ ಸಂಶೋಧನಾ ಪ್ರಬಂಧವನ್ನು ಸಿದ್ಧಪಡಿಸುವಲ್ಲಿ ನನಗೆ ಸಲಹೆ ನೀಡಿದ ವಿಭಾಗದ ಮುಖ್ಯಸ್ಥರಾದ ಡಾ|| ಅ. ಸುಂದರ ಅವರಿಗೆ ಮತ್ತು ನನ್ನ ಸಂಶೋಧನೆಗೆ ಮಾರ್ಗದರ್ಶಕರಾದ ಡಾ|| ಎಚ್.ಆರ್. ರಘುನಾಥಭಟ್ ಇವರಿಗೆ ನನ್ನ ಕೃತಜ್ಞತೆಗಳು.ಅರಣ್ಯ ಭಾಗದಲ್ಲಿ ಹುದುಗಿದ ಕೋಟೆಗೆ ಬಂದು ನನ್ನೊಡನೆ ಸಹಕರಿಸಿದ ಗೇರುಸೊಪ್ಪೆಯ ಮಂಜುನಾಥನಾಯ್ಕ ಇವರನ್ನು ಸ್ಮರಿಸುತ್ತೇನೆ.